ಲಿಖಿತ ಮೂಲಕ ಉತ್ತರಿಸುವ

# ಕರ್ನಾಟಕ ವಿಧಾನ ಪರಿಷತ್ತು

ನೂರ ಮೂವತ್ತೆಂಟನೆಯ ಅಧಿವೇಶನ

ಸೋಮವಾರ, ದಿನಾಂಕ : 22ನೇ ಜುಲೈ, 2019

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಲ್ಲಿ ನಡೆಸಲ್ಪಡುವ ವಸತಿ ಗೃಹ ಹಾಗೂ ವಾರ್ಡನ್ ಇವರ ಕರ್ತವ್ಯದ ಬಗ್ಗೆ

ಶ್ರೀ ಘೋಟ್ನೇಕರ ಶ್ರೀಕಾಂತ ಲಕ್ಷ್ಮಣ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

439 (650) ಮಾನ್ಯ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಕಾರವಾರ ಜಿಲ್ಲೆಯ ಹಳಿಯಾಳ ತಾಲ್ಲೂಕಿನಲ್ಲಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಿಂದ ನಡೆಸಲ್ಪಡುವ ವಸತಿ ಗೃಹಗಳ ಸಂಖ್ಯೆ ಎಷ್ಟು ; (ಬಾಲಕರ / ಬಾಲಕಿಯರ ವಸತಿ ಗೃಹಗಳ ವಿವರ ನೀಡುವುದು)

(ಆ) ಸದರಿ ವಸತಿ ಗೃಹಗಳಲ್ಲಿ ಇರುವ ವಾರ್ಡನ್‌ಗಳ ವಿವರ ನೀಡುವುದು ;

(ಇ) ಈಗಾಗಲೇ ಕೆಲವೊಂದು ಬಾಲಕಿಯರ ವಸತಿ ಗೃಹದಲ್ಲಿ ವಾರ್ಡನ್ ಹುದ್ದೆ ಗಂಡು ಮಕ್ಕಳು ನಿರ್ವಹಿಸುತ್ತಿರುವುದರಿಂದ ಕೆಲವೊಂದು ವಸತಿ ಗೃಹದಲ್ಲಿ ಅಹಿತಕರ ಘಟನೆ ನಡೆಯುತ್ತಿದ್ದು, ನಿಯಮದ ಪ್ರಕಾರ ಬಾಲಕಿಯರ ವಸತಿ ಗೃಹದಲ್ಲಿ ಹೆಣ್ಣು ಮಕ್ಕಳೇ ವಾರ್ಡನ್ ಹುದ್ದೆ ನಿಭಾಯಿಸಲು ಸರ್ಕಾರದ ಆದೇಶ ಇರುವುದೇ ; (ವಿವರ ನೀಡುವುದು)

(ಈ) ವಸತಿ ಗೃಹದಲ್ಲಿ ವಾಸ್ತವ್ಯ ಮಾಡುತ್ತಿರುವ ಹೆಣ್ಣು ಮಕ್ಕಳ ಹಿತದೃಷ್ಟಿಯಿಂದ ತಾಲ್ಲೂಕಿನಲ್ಲಿ ಬಾಲಕಿಯರ ವಸತಿ ಗೃಹಕ್ಕೆ ಹೆಣ್ಣು ಮಕ್ಕಳೇ ವಾರ್ಡನ್ ಹುದ್ದೆ ನಿಭಾಯಿಸಲು ಕ್ರಮ ಕೈಗೊಳ್ಳಲಾಗುವುದೇ ? (ವಿವರ ನೀಡುವುದು)